# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 2464* |
| ಸದಸ್ಯರ ಹೆಸರು | ಶ್ರೀ ಎಸ್.ರುದ್ರೇಗೌಡ |
| ಉತ್ತರಿಸುವ ದಿನಾಂಕ | 23-03-2022 |
| ಉತ್ತರಿಸುವವರು | ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಪ್ರಸಿದ್ಧ ದೇವಸ್ಥಾನಗಳಲ್ಲಿ ಒಂದಾದ ಶಿವಮೊಗ್ಗ ಜಿಲ್ಲೆಯ, ಸೊರಬ ತಾಲ್ಲೂಕಿನ, ಚಂದ್ರಗುತ್ತಿ ಶ್ರೀ ರೇಣುಕಾಂಬ ದೇವಸ್ಥಾನಕ್ಕೆ ಪ್ರತಿ ವರ್ಷ ಭೇಟಿ ನೀಡುವ ಭಕ್ತರ ಸಂಖ್ಯೆ ಎಷ್ಟು; | ಶಿವಮೊಗ್ಗ ಜಿಲ್ಲೆಯ, ಸೊರಬ ತಾಲ್ಲೂಕಿನ, ಚಂದ್ರಗುತ್ತಿ ಶ್ರೀ ರೇಣುಕಾಂಬ ದೇವಸ್ಥಾನಕ್ಕೆ ಪ್ರತಿ ಮಾಹೆಯಲ್ಲಿ ಕನಿಷ್ಠ 10,000 ರಿಂದ 20,000 ಭಕ್ತಾಧಿಗಳು ಆಗಮಿಸುತ್ತಾರೆ ಹಾಗೂ ವಿಶೇಷವಾಗಿ ಶ್ರಾವಣ ಮಾಸ ದಸರಾ ಹಾಗೂ ರಥೋತ್ಸವದ ಸಮಯದಲ್ಲಿ 50,000 ಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಭಕ್ತಾಧಿಗಳು ಆಗಮಿಸುವುದರಿಂದ ಶ್ರೀ ರೇಣುಕಾಂಬ ದೇವಸ್ಥಾನಕ್ಕೆ ಪ್ರತಿ ವರ್ಷ ಅಂದಾಜು 2,00,000 ರಿಂದ 5,00,000 ಜನ ಭಕ್ತಾಧಿಗಳು ಭೇಟಿ ನೀಡುತ್ತಿದ್ದಾರೆ |
| ಆ) | 'ಎ' ದರ್ಜೆಯ ಈ ದೇವಸ್ಥಾನಕ್ಕೆ ಕಳೆದ ಹತ್ತು ವರ್ಷಗಳಿಂದ ಬಂದಿರುವ ಆದಾಯವೆಷ್ಟು; (ವಿವರಗಳನ್ನು ಒದಗಿಸುವುದು) | ಶಿವಮೊಗ್ಗ ಜಿಲ್ಲೆಯ, ಸೊರಬ ತಾಲ್ಲೂಕಿನ, ಚಂದ್ರಗುತ್ತಿ ಶ್ರೀ ರೇಣುಕಾಂಬ ದೇವಸ್ಥಾನಕ್ಕೆ ಕಳೆದ ಹತ್ತು ವರ್ಷಗಳಿಂದ ಬಂದ ಆದಾಯದ ವಿವರ ಕೆಳಕಂಡಂತಿದೆ. (ಟೇಬಲ್ ಕೆಳಗೆ) |
| ಇ) | ಸರ್ಕಾರದಿಂದ ಪ್ರತಿ ವರ್ಷ ಈ ದೇವಸ್ಥಾನದ ಅಭಿವೃದ್ಧಿಗೆ ಅನುದಾನ ನೀಡಲಾಗುತ್ತಿದೆಯೇ; ಅನುದಾನ ಒದಗಿಸದಿದ್ದಲ್ಲಿ ಕಾರಣಗಳೇನು; | • ಶಿವಮೊಗ್ಗ ಜಿಲ್ಲೆಯ, ಸೊರಬ ತಾಲ್ಲೂಕಿನ, ಚಂದ್ರಗುತ್ತಿ ಶ್ರೀ ರೇಣುಕಾಂಬ ದೇವಸ್ಥಾನವು ಆದಾಯವಿರುವ ಪ್ರವರ್ಗ 'ಎ' ಶ್ರೇಣಿಯ ದೇವಾಲಯವಾಗಿರುತ್ತದೆ. ಹಾಗೂ ಭಾರತೀಯ ಪುರಾತತ್ವ ಇಲಾಖೆಯ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಪ್ರತಿ ಆರ್ಥಿಕ ವರ್ಷ ಜಿಲ್ಲಾಧಿಕಾರಿಗಳಿಂದ ಅನುದಾನ ಕೋರಿ ಪ್ರಸ್ತಾವನೆ ಬಂದಲ್ಲಿ, ಪ್ರಸ್ತಾವನೆಗೆ ಅನುಗುಣವಾಗಿ ಅನುದಾನ ಮಂಜೂರು ಮಾಡಲಾಗುತ್ತದೆಯೇ ಹೊರತು ಯಾವುದೇ ಸಂಸ್ಥೆಗೆ ಪ್ರತಿ ವರ್ಷ ಅನುದಾನ ಮಂಜೂರು ಮಾಡಲಾಗುತ್ತಿಲ್ಲ. ಅದೇ ರೀತಿ ಈ ದೇವಸ್ಥಾನಕ್ಕೆ ಪ್ರತಿ ವರ್ಷ ಸರ್ಕಾರದಿಂದ ಅನುದಾನ ನೀಡಲಾಗುತ್ತಿಲ್ಲ. ಅಲ್ಲದೆ ಸದರಿ ಸಂಸ್ಥೆಯು ಪ್ರವರ್ಗ 'ಎ' ಶ್ರೇಣಿಯ ದೇವಾಲಯವಾಗಿದ್ದು ಕಾಮಗಾರಿ ಅನುಷ್ಠಾನಗೊಳಿಸಲು ಆರ್ಥಿಕವಾಗಿ ಸದೃಡವಾಗಿರುತ್ತದೆ.<br><br>• ಈ ದೇವಸ್ಥಾನವು ಭಾರತೀಯ ಪುರಾತತ್ವ ಇಲಾಖೆಗೆ ಒಳಪಟ್ಟಿರುವುದರಿಂದ ದೇವಾಲಯದ ಅಭಿವೃದ್ಧಿ, ಮೂಲಭೂತ ಸೌಕರ್ಯ ಒದಗಿಸುವ ಕುರಿತಂತೆ ಅನುಮತಿ ಕೋರಿ ಭಾರತೀಯ ಪುರತತ್ವ ಇಲಾಖೆಗೆ ಪತ್ರ ಬರೆಯಲಾಗಿದ್ದು, ಸದರಿ ಇಲಾಖೆಯವರಿಂದ ಅನುಮತಿ ನೀಡಿದ ನಂತರ ದೇವಾಲಯದ ನಿಧಿಯಿಂದ ಅನುದಾನ ಭರಿಸಿ ಅಭಿವೃದ್ಧಿ ಪಡಿಸಲು ಕ್ರಮ ವಹಿಸಲಾಗುವುದು. |

ರೂ.ಗಳಲ್ಲಿ

| ಕ್ರ.ಸಂ | ವರ್ಷ | ಆದಾಯದ ವಿವರ |
|---|---|---|
| 1. | 2011-12 | 21,21,605.00 |
| 2. | 2012-13 | 30,01,367.00 |
| 3. | 2013-14 | 34,71,745.00 |
| 4. | 2014-15 | 60,56,004,.00 |
| 5. | 2015-16 | 89,74,028.00 |
| 6. | 2016-17 | 99,64,950.00 |
| 7. | 2017-18 | 1,03,95,618.00 |
| 8. | 2018-19 | 1,17,35,024.00 |
| 9. | 2019-20 | 1,51,02,867.00 |
| 10. | 2020-21 | 1,06,60,236.00 |

| | | |
|---|---|---|
| ಈ) | ಭಕ್ತಾಧಿಗಳ ವಾಸ್ತವ್ಯಕ್ಕೆ ಅನುಕೂಲವಾಗುವಂತೆ ವಸತಿ ಗೃಹಗಳ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ, ಬಂದಿದ್ದಲ್ಲಿ, ವಸತಿ ಗೃಹ ನಿರ್ಮಾಣಕ್ಕೆ ಕ್ರಮ ಕೈಗೊಳ್ಳಲಾಗುವುದೇ: | ಚಂದ್ರಗುತ್ತಿ ಶ್ರೀ ರೇಣುಕಾಂಬ ದೇವಸ್ಥಾನಕ್ಕೆ ಭಕ್ತಾಧಿಗಳ ವಾಸ್ತವ್ಯದ ಅನುಕೂಲಕ್ಕಾಗಿ 10 ಕೊಠಡಿಗಳ ಯಾತ್ರಿ ನಿವಾಸವಿದ್ದು, ಈಗ ಇರುವ ಕೊಠಡಿಗಳಿಗೇ ಹೆಚ್ಚಿನ ಸಂಖ್ಯೆಯಲ್ಲಿ ಭಕ್ತಾಧಿಗಳು ವಾಸ್ತವ್ಯಕ್ಕೆ ಬರುತ್ತಿಲ್ಲ, ಆದುದರಿಂದ ಹೆಚ್ಚುವರಿ ಕೊಠಡಿಗಳ ಅವಶ್ಯಕತೆ ಕಂಡುಬರುವುದಿಲ್ಲ. |
| ಉ) | ಮಲೆನಾಡು ಭಾಗದ ಈ ಪ್ರಸಿದ್ಧ ದೇವಸ್ಥಾನಕ್ಕೆ ರೋಪ್-ವೇ ಅಳವಡಿಸಲು ಕ್ರಮ ಕೈಗೊಳ್ಳುಲಾಗುವುದೇ? | ಪ್ರಸ್ತುತ ದೇವಸ್ಥಾನಕ್ಕೆ ರೋಪ್-ವೇ ಅಳವಡಿಸುವ ಬಗ್ಗೆ ಯಾವುದೇ ಯೋಜನೆ ಇರುವುದಿಲ್ಲ. ಮುಂದಿನ ದಿನಗಳಲ್ಲಿ ದೇವಾಲಯಕ್ಕೆ ರೋಪ್-ವೇ ಅಳವಡಿಸುವ ಬಗ್ಗೆ ನಿಯಮಾನುಸಾರ ಪ್ರಸ್ತಾವನೆ ಪಡೆದು ಪರಿಶೀಲಿಸಲಾಗುವುದು. |

ಸಂಖ್ಯೆ: ಕಂಇ 1051 ಮುಸಪ್ರ 2022

(ಶಶಿಕಲಾ. ಅ. ಜೊಲ್ಲೆ)
ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು

Scanned with CamScanner